# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 2515 |
| ಸದಸ್ಯರ ಹೆಸರು | : | ಶ್ರೀ ಸುನಿಲ್ ವಲ್ಯಾಪುರ್ (ವಿಧಾನಸಭೆಯಿಂದ ಚುನಾಯಿತರಾದವರು) |
| ಉತ್ತರಿಸುವ ದಿನಾಂಕ | : | 23-03-2022. |
| ಉತ್ತರಿಸುವ ಸಚಿವರು | : | ಲೋಕೋಪಯೋಗಿ ಸಚಿವರು |

<table>
<tr><th>ಕ್ರ.ಸಂ.</th><th>ಪ್ರಶ್ನೆಗಳು</th><th>ಉತ್ತರ</th></tr>
<tr><td>ಅ)</td><td>ಕಲ್ಯಾಣ ಕರ್ನಾಟಕ ಜಿಲ್ಲೆಗಳಲ್ಲಿ ಲೋಕೋಪಯೋಗಿ ಇಲಾಖೆ ವ್ಯಾಪ್ತಿಯಲ್ಲಿರುವ ರಾಜ್ಯಹೆದ್ದಾರಿಗಳ ಒಟ್ಟು ವಿಸ್ತೀರ್ಣ ಎಷ್ಟು; (ಜಿಲ್ಲಾವಾರು ಸಂಪೂರ್ಣ ವಿವರ ನೀಡುವುದು)</td><td>ಕಲ್ಯಾಣ ಕರ್ನಾಟಕ ಜಿಲ್ಲೆಗಳಲ್ಲಿ ಲೋಕೋಪಯೋಗಿ ಇಲಾಖೆ ವ್ಯಾಪ್ತಿಯಲ್ಲಿರುವ ರಾಜ್ಯ ಹೆದ್ದಾರಿಗಳ ವಿವರಗಳನ್ನು ಅನುಬಂಧ-1 ರಲ್ಲಿ ನೀಡಲಾಗಿದೆ.</td></tr>
<tr><td>ಆ)</td><td>ಈ ಹೆದ್ದಾರಿಗಳ ನಿರ್ವಹಣೆಗಾಗಿ ಕಳೆದ 3 ವರ್ಷಗಳಲ್ಲಿ ಸರ್ಕಾರ ಒದಗಿಸಿರುವ ಅನುದಾನವೆಷ್ಟು; ಸದರಿ ಹೆದ್ದಾರಿಗಳಲ್ಲಿ ಎಷ್ಟು ವರ್ಷಗಳವರೆಗೆ ಟೋಲ್ ಸಂಗ್ರಹಿಸಲಾಗುವುದು; ಸದರಿ ಹೆದ್ದಾರಿಗಳ ಬದಿಗಳಲ್ಲಿ ಸರ್ವಿಸ್ ರಸ್ತೆ ಕಾಮಗಾರಿ ಅಪೂರ್ಣವಾಗಿದ್ದರೂ ಟೋಲ್ ಸಂಗ್ರಹ ಪ್ರಾರಂಭವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಸರ್ಕಾರ ಕೈಗೊಂಡ ಕ್ರಮಗಳೇನು; (ಸಂಪೂರ್ಣ ವಿವರ ನೀಡುವುದು)</td><td>ಲೋಕೋಪಯೋಗಿ ಇಲಾಖೆ ಈಶಾನ್ಯ ವಲಯ ವ್ಯಾಪ್ತಿಯಲ್ಲಿ ಒದಗಿಸಲಾದ ಅನುದಾನದ ವಿವರಗಳನ್ನು ಅನುಬಂಧ-2 ರಲ್ಲಿ ನೀಡಲಾಗಿದೆ. ಹಾಗೂ ಸದರಿ ವಲಯ ವ್ಯಾಪ್ತಿಯಲ್ಲಿ ಟೋಲ್ ನಿರ್ವಹಣೆಯನ್ನು ಕೈಗೊಂಡಿರುವುದಿಲ್ಲ. ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತ ವತಿಯಿಂದ ನಿರ್ವಹಿಸುತ್ತಿರುವ ವಿವರಗಳನ್ನು ಈ ಕೆಳಗೆ ನೀಡಲಾಗಿದೆ
<table>
<tr><th>ಕ್ರ ಸಂ</th><th>ರಸ್ತೆಯ ಹೆಸರು</th><th>ಒದಗಿಸಿರುವ ಅನುದಾನ ರೂ. ಕೋಟಿಗಳಲ್ಲಿ</th><th>ಟೋಲ್ ಸಂಗ್ರಹಣಾ ಅವಧಿ</th><th>ಹಂತ</th></tr>
<tr><td>1</td><td>ಬೀದರ – ಚಿಂಚೋಳಿ (ರಾ.ಹೆ – 15) ಕಿ.ಮೀ. 47+36 ರಿಂದ 107+40 ವಿನ್ಯಾಸ, ನಿರ್ಮಾಣ, ಹಣಕಾಸು ಚಾಲನೆ, ನಿರ್ವಹಣೆ ಮತ್ತು ವರ್ಗಾವಣೆ (DBFOMT – Annuity Basis) ಆಧಾರದ ಮೇಲೆ ವಿಶ್ವಬ್ಯಾಂಕ್ ನೆರವಿನೊಂದಿಗೆ ರಸ್ತೆ ಅಭಿವೃದ್ಧಿ.</td><td>36.19 (ವಿಶ್ವ ಬ್ಯಾಂಕ್ ಸಾಲದ ನೆರವು)<br>36.19 (ದೇಶಿಯ ಬ್ಯಾಂಕ್ ಸಾಲದ ನೆರವು)</td><td>13 ವರ್ಷ</td><td>ಯೋಜನಾ ರಸ್ತೆಯು ಕಾರ್ಯಾಚರಣೆ ಮತ್ತು ನಿರ್ವಹಣೆ ಅವಧಿಯಲ್ಲಿದೆ</td></tr>
<tr><td>2</td><td>ವಿಶ್ವಬ್ಯಾಂಕ್ ಆರ್ಥಿಕ ನೆರವಿನ ಹೈಬ್ರೀಡ್ ಆನ್ಯೂಟಿ ಮಾದರಿಯ ಯೋಜನೆ ಅಡಿಯಲ್ಲಿ ಮುಂಡರಗಿ–ಹಡಗಲಿ–ಹರಪನಹಳ್ಳಿ ರಾಜ್ಯ ಹೆದ್ದಾರಿ–45 ಮತ್ತು 47 ರ ರಸ್ತೆ ಅಭಿವೃದ್ಧಿ ಕಾಮಗಾರಿ</td><td>32.83 (ವಿಶ್ವ ಬ್ಯಾಂಕ್ ಸಾಲದ ನೆರವು)<br>32:83 (ದೇಶಿಯ ಬ್ಯಾಂಕ್ ಸಾಲದ ನೆರವು)</td><td>13 ವರ್ಷ</td><td>ಯೋಜನಾ ರಸ್ತೆಯು ಕಾರ್ಯಾಚರಣೆ ಮತ್ತು ನಿರ್ವಹಣೆ ಅವಧಿಯಲ್ಲಿದೆ</td></tr>
<tr><td>3.</td><td>ವಾಗ್ಧಾರಿ–ರಿಬ್ಬನ್‌ಪಲ್ಲಿ ರಸ್ತೆ ಅಗಲೀಕರಣ ಮತ್ತು ಅಭಿವೃದ್ಧಿ ಕಾಮಗಾರಿ ಪಿಪಿಪಿ–ಬಿ.ಓ.ಟಿ–ವಿ.ಜಿ.ಎಫ್ (ಶುಲ್ಕ) ಆಧಾರದ ಅಡಿಯಲ್ಲಿ ಅಭಿವೃದ್ಧಿ.</td><td>•ಅನುಮೋದಿತ ಹಾಗೂ ಬಿಡುಗಡೆ ಮಾಡಲಾದ ಒಟ್ಟಾರೆ ವಿಜಿಎಫ್ ಮೊತ್ತ : ರೂ.90.66 ಕೋಟಿ<br>•ಕೇಂದ್ರ ಸರ್ಕಾರದ ಪಾಲು : ರೂ.47.71 ಕೋಟಿ<br>•ರಾಜ್ಯ ಸರ್ಕಾರದ ಪಾಲು : ರೂ.42.95 ಕೋಟಿ</td><td>28 ವರ್ಷ</td><td>ಯೋಜನಾ ರಸ್ತೆಯು ಕಾರ್ಯಾಚರಣೆ ಮತ್ತು ನಿರ್ವಹಣೆ ಅವಧಿಯಲ್ಲಿದೆ</td></tr>
</table>
</td></tr>
</table>

| | | | | |
|---|---|---|---|---|
| 4. | ಗಿಣಿಗೇರಾ-ಗಂಗಾವತಿ-ಸಿಂಧನೂರು (ರಾ.ಹೆ-23) ರಲ್ಲಿ ಸರಪಳಿ.79+000 ರಿಂದ 162+000 ರವರೆಗೆ 83+000 ಕಿ.ಮೀ ಉದ್ದದ ರಸ್ತೆಯನ್ನು ಪಿಪಿಪಿ-ಡಿ.ಬಿ.ಎಫ್.ಓ.ಟಿ-ವಿಜಿಎಫ್-(ಶುಲ್ಕ) ಆಧಾರದಲ್ಲಿ ಅಭಿವೃದ್ಧಿ | ಅನುಮೋದಿತ ಹಾಗೂ ಬಿಡುಗಡೆ ಮಾಡಲಾದ ವಿಜಿಎಫ್ ಮೊತ್ತ : ರೂ.4.59 ಕೋಟಿ ಮಾತ್ರ ಕೇಂದ್ರ ಸರ್ಕಾರದಿಂದ ಭರಿಸಲಾಗಿದೆ. | 22 ವರ್ಷ | ಯೋಜನಾ ರಸ್ತೆಯು ಕಾರ್ಯಾಚರಣೆ ಮತ್ತು ನಿರ್ವಹಣೆ ಅವಧಿಯಲ್ಲಿದೆ |

ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದ ವತಿಯಿಂದ ಟೋಲ್ ಸಂಗ್ರಹವಾಗುತ್ತಿರುವ ಎಲ್ಲಾ ರಾಜ್ಯ ಹೆದ್ದಾರಿಗಳು ತಾಲ್ಲೂಕು ಮತ್ತು ಜಿಲ್ಲಾ ಕೇಂದ್ರಗಳನ್ನು ಸಂಪರ್ಕಿಸುವ ರಸ್ತೆಗಳಾಗಿದ್ದು, ವಾಹನ ಸಾಂದ್ರತೆಗೆ ಅನುಗುಣವಾಗಿ ರಸ್ತೆಯ ಅಗಲವನ್ನು ನಿರ್ಧರಿಸಿದ್ದು, ವಾಹನ ಸಂಚಾರ ದಟ್ಟಣೆ ಕಡಿಮೆ ಇರುವ ಕಾರಣ ಸ್ಥಳೀಯ ಮತ್ತು Through Traffic ಗಳನ್ನು ಪ್ರತ್ಯೇಕಿಸಲು ಸರ್ವೀಸ್ ರಸ್ತೆಗಳನ್ನು ನಿರ್ಮಿಸುವ ಅವಶ್ಯಕತೆಕಂಡು ಬಂದಿರುವುದಿಲ್ಲ. ಆದ್ದರಿಂದ ಟೋಲ್ ಸಂಗ್ರಹಿಸುವ ರಾಜ್ಯ ಹೆದ್ದಾರಿಗಳಲ್ಲಿ ಸರ್ವೀಸ್ ರಸ್ತೆಯನ್ನು ಪರಿಗಣಿಸಿರುವುದಿಲ್ಲ.

ರಾಜ್ಯ ಸರ್ಕಾರ ಹೊರಡಿಸಿರುವ ದಿನಾಂಕ:07-03-2015 ರ ಟೋಲ್ ನೀತಿಯು ರಾಜ್ಯ ಹೆದ್ದಾರಿಗಳಲ್ಲಿ ಸ್ಥಾಪಿಸಿರುವ ಟೋಲ್ ರಸ್ತೆಗಳಿಗೆ ಅನ್ವಯವಾಗುತ್ತಿದ್ದು, ಸದರಿ ನೀತಿಯ ನಿಯಮಾವಳಿಗಳಲ್ಲಿ ಟೋಲ್ ಶುಲ್ಕ ಸಂಗ್ರಹಣೆ ಮಾಡುವ ಮೊದಲು ಸರ್ವೀಸ್ ರಸ್ತೆಗಳನ್ನು ನಿರ್ಮಿಸುವ ಬಗ್ಗೆ ಯಾವುದೇ ಆದೇಶವಿರುವುದಿಲ್ಲ.

ರಸ್ತೆ ಕಾಮಗಾರಿಗಳು ಪೂರ್ಣಗೊಂಡ ನಂತರ ಹಾಗೂ ಪಿಪಿಪಿ ಮಾದರಿಯಲ್ಲಿ ನಿರ್ಮಿಸಿದ ರಸ್ತೆಗಳಲ್ಲಿ ಕಾಮಗಾರಿಗಳಿಗೆ ಪ್ರಾಸ್ತಾವಿಕ ಪ್ರಮಾಣ ಪತ್ರ (PCOD) ನೀಡಿದ ನಂತರ ಶುಲ್ಕ ಸಂಗ್ರಹಣೆ ಪ್ರಾರಂಭಿಸಲಾಗಿರುತ್ತದೆ.

| | | |
|---|---|---|
| ಇ) | ಸದರಿ ಟೋಲ್ ಗೇಟ್‌ಗಳಲ್ಲಿ ಟೋಲ್ ಸಂಗ್ರಹದಿಂದ ಯಾವ ಯಾವ ವಾಹನಗಳಿಗೆ ವಿನಾಯಿತಿ ನೀಡಲಾಗಿದೆ; ಈ ವಿನಾಯಿತಿಗೆ ನೀಡುವ ಮಾನದಂಡಗಳೇನು; (ವಿವರ ನೀಡುವುದು) | ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತ ವತಿಯಿಂದ ಸ್ಥಳೀಯ ನಿವಾಸಿಗಳಿಗೆ ಅನುಕೂಲವಾಗಲು, ಸರ್ಕಾರದ ಅಧಿಸೂಚನೆ ಸಂಖ್ಯೆ: ಲೋಇ: 06 ಇಎಪಿ 2012(ಪಿ3), ದಿನಾಂಕ: 07-03-2015 ರಲ್ಲಿ ತಿಳಿಸಿರುವ ವಿನಾಯಿತಿ ಮಾನದಂಡಗಳು ಈ ಕೆಳಕಂಡಂತೆ ಇರುತ್ತದೆ.<br>ಅ) ದ್ವಿಚಕ್ರ ಹಾಗೂ ತ್ರಿಚಕ್ರ ವಾಹನಗಳು, ಟ್ರ್ಯಾಕ್ಟರ್‌ಗಳು, ಎತ್ತಿನ ಗಾಡಿಗಳು ಮತ್ತು ಟ್ರೈಲರ್‌ಗಳಿಗೆ ಟೋಲ್ ಶುಲ್ಕದಿಂದ ವಿನಾಯಿತಿ ಇರುತ್ತದೆ.<br>ಆ) ರಸ್ತೆ ಬಳಕೆದಾರರು Daily Pass ಮತ್ತು Monthly Pass ಗಳನ್ನು ಪಡೆಯುವುದರ ಮೂಲಕ ರಿಯಾಯಿತಿಯನ್ನು ಪಡೆಯಬಹುದಾಗಿದೆ.<br>ಇ) ಟೋಲ್ ಪ್ಲಾಜಾದಿಂದ 20 ಕಿ.ಮೀ ಅಂತರದೊಳಗೆ ವಾಸಿಸುವ ಖಾಸಗಿ ವಾಹನಗಳಿಗೆ ಲೋಕಲ್ ಪಾಸ್ ಸೌಲಭ್ಯವಿದ್ದು ಮಾಹೆಗೆ ರೂ.205 ಪಾವತಿಸಿ ಲೋಕಲ್ ಪಾಸ್ ಪಡೆಯುವುದರ ಮೂಲಕ ರಿಯಾಯಿತಿಯನ್ನು ರಸ್ತೆ ಬಳಕೆದಾರರು ಪಡೆಯಬಹುದಾಗಿದೆ.<br>ಈ) ಕೇಂದ್ರ ಮತ್ತು ರಾಜ್ಯ ಸರ್ಕಾರಿ ವಾಹನಗಳು, ಸಂಸದ್ ಸದಸ್ಯರು ಹಾಗೂ ಶಾಸಕರ ವಾಹನಗಳು, ಮಿಲಿಟರಿ ಮತ್ತು ಆರಕ್ಷಕ ವಾಹನಗಳು, ಇವುಗಳಿಗೆ ಟೋಲ್ ಶುಲ್ಕದಿಂದ ವಿನಾಯಿತಿ ಇರುತ್ತದೆ. |

| | | |
|---|---|---|
| ಈ) | ಕಲ್ಯಾಣ ಕರ್ನಾಟಕ ಜಿಲ್ಲೆಗಳಲ್ಲಿ ಹಾದು ಹೋಗಿರುವ ಬೀದರ್-ಶ್ರೀರಂಗಪಟ್ಟಣ ರಾಜ್ಯ ಹೆದ್ದಾರಿಯ ಮೇಲೆ ಸಂಚಾರ ದಟ್ಟಣೆ ಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಸರ್ಕಾರ ಕೈಗೊಂಡ ಕ್ರಮಗಳೇನು; | ಕಲ್ಯಾಣ ಕರ್ನಾಟಕ ಜಿಲ್ಲೆಗಳಲ್ಲಿ ಹಾದು ಹೋಗಿರುವ ಬೀದರ್-ಶ್ರೀರಂಗಪಟ್ಟಣ ಹೆದ್ದಾರಿಯು ರಾಷ್ಟ್ರೀಯ ಹೆದ್ದಾರಿ-50 & 150ಎ ಎಂದು ಮೇಲ್ದರ್ಜೆ ಆಗಿರುತ್ತದೆ.<br><br>ಸದರಿ ಹೆದ್ದಾರಿಯ ಮೇಲೆ ಸಂಚಾರ ದಟ್ಟಣೆ ಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ. ಆದ್ದರಿಂದ ಈ ಕೆಳಗಿನಂತೆ ಕ್ರಮ ಕೈಗೊಳ್ಳಲಾಗಿದೆ.<br><br>ಅದರಂತೆ ರಾಷ್ಟ್ರೀಯ ಹೆದ್ದಾರಿ ವಲಯದಿಂದ ರಾಷ್ಟ್ರೀಯ ಹೆದ್ದಾರಿ-50: ಬೀದರ್‌ನಿಂದ ಹುಮನಾಬಾದ ವರೆಗಿನ ಹೆದ್ದಾರಿಯ ಮರು ನಿರ್ಮಾಣ ಕಾಮಗಾರಿ (2L/4L with PS) ಯನ್ನು ಕೈಗೊಂಡಿದ್ದು, ಪ್ರಸ್ತುತ ಕಾಮಗಾರಿ ಪ್ರಗತಿಯಲ್ಲಿದ್ದು, ಮಾರ್ಚ್-2023 ರವರೆಗೆ ಕಾಮಗಾರಿಗೆ ಮುಕ್ತಾಯದ ಕಾಲಾವಧಿ ಇರುತ್ತದೆ<br><br>ರಾಷ್ಟ್ರೀಯ ಹೆದ್ದಾರಿ-50ರ ಹುಮನಾಬಾದ್‌ನಿಂದ ಜೇವರ್ಗಿವರೆಗಿನ ರಸ್ತೆಯು ಭಾರತೀಯ ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರ ರವರ ವ್ಯಾಪ್ತಿಗೆ ಒಳಪಡುತ್ತದೆ. ಈ ಭಾಗವನ್ನು NHAI ರವರು 2L with paved shoulder ರೊಂದಿಗೆ ಅಭಿವೃದ್ಧಿಪಡಿಸಿರುತ್ತಾರೆ. ಈಗ O&M ಹಂತದಲ್ಲಿರುತ್ತದೆ.<br><br>• ರಾಷ್ಟ್ರೀಯ ಹೆದ್ದಾರಿ-150ಎ ಜೇವರ್ಗಿಯಿಂದ- ಶಹಾಪುರ ವರೆಗಿನ ರಸ್ತೆಯು ಕಿ.ಮೀ.0.00 ರಿಂದ 50.00 ವರೆಗೆ ಕಲಬುರ್ಗಿ ಹಾಗೂ ಯಾದಗಿರಿ ಜಿಲ್ಲೆಗಳಲ್ಲಿ ಹಾದುಹೋಗುತ್ತಿದ್ದು, ಭಾರತೀಯ ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರದವರ ವ್ಯಾಪ್ತಿಗೆ ಒಳಪಟ್ಟಿರುತ್ತದೆ. ಈ ಭಾಗಕ್ಕೆ 4 ಪಥದ ರಸ್ತೆಯ ವಿಸ್ತೃತ ಯೋಜನಾ ವರದಿಗೆ ಸಕ್ಷಮ ಪ್ರಾಧಿಕಾರದ ಅನುಮೋದನೆ ಕೋರಿ ಸಲ್ಲಿಸಿರುವುದಾಗಿ ಭಾರತೀಯ ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರರವರು ವರದಿಸಿರುತ್ತಾರೆ.<br><br>ರಾಷ್ಟ್ರೀಯ ಹೆದ್ದಾರಿ-150ಎ ಕಿ.ಮೀ.50.00 ರಿಂದ 254.80 (ಹತ್ತಿಗೂಡುರರಿಂದ ವಕ್ರಾಣಿ ಕ್ಯಾಂಪ್) ರವರೆಗೆ ಕಲ್ಯಾಣ ಕರ್ನಾಟಕ ಭಾಗಕ್ಕೆ ಸೇರಿದ್ದು, ರಾಷ್ಟ್ರೀಯ ಹೆದ್ದಾರಿ ವಲಯ ವ್ಯಾಪ್ತಿಗೆ ಒಳಪಡುತ್ತದೆ.<br>• ರಾಷ್ಟ್ರೀಯ ಹೆದ್ದಾರಿ-150ಎ ಹತ್ತಿಗೂಡುರರಿಂದ ಕಿ.ಮೀ 50.00-ತಿಂತ್ತಣಿ ಸೇತುವೆ ಕಿ.ಮೀ.89.300 ವರೆಗೆ. ಸದರಿ ಹೆದ್ದಾರಿಯು Intermediate lane ಆಗಿರುತ್ತದೆ ಹಾಗೂ ಈ ಭಾಗಕ್ಕೆ ನಿಯತಕಾಲಿಕ ನವೀಕರಣ ಯೋಜನೆಯಡಿಯಲ್ಲಿ ನವೀಕರಣ ಕಾಮಗಾರಿ ಕೈಗೊಳ್ಳಲಾಗುತ್ತಿದ್ದು, ಪ್ರಸ್ತುತ ಮುಕ್ತಾಯ ಹಂತದಲ್ಲಿರುತ್ತದೆ ಹಾಗೂ ಅಗಲೀಕರಣ ಕಾಮಗಾರಿಗೆ ವಾರ್ಷಿಕ ಕ್ರಿಯಾ ಯೋಜನೆಯಡಿಯಲ್ಲಿ ಪ್ರಸ್ತಾಪಿಸಲಾಗುವುದು.<br>• ರಾಷ್ಟ್ರೀಯ ಹೆದ್ದಾರಿ-150ಎ ಕಿ.ಮೀ.89.300 ರಿಂದ 198.920 ರಾಯಚೂರು ಜಿಲ್ಲೆಯ ಲಿಂಗಸುಗೂರು, ಮಸ್ಕಿ, ಸಿಂಧನೂರು ತಾಲ್ಲೂಕುಗಳಲ್ಲಿ ಹಾದುಹೋಗುತ್ತದೆ. |

| | | |
|---|---|---|
| | | • ಈ ಭಾಗಕ್ಕೆ ಕೆಳಕಂಡಂತೆ ಕಾಮಗಾರಿಯನ್ನು ಕೈಗೊಳ್ಳಲಾಗಿದೆ. |

| ಕ್ರ ಸಂ | ಚೈನೇಜ್ ಕಿ.ಮೀ | ಕಾಮಗಾರಿ ಹೆಸರು | ಷರಾ |
|---|---|---|---|
| 1 | 89.30 ರಿಂದ 113.00 | ರಾಷ್ಟ್ರೀಯ ಹೆದ್ದಾರಿ 150ಎ ರಲ್ಲಿ ನಿಯತಕಾಲಿಕ ನಿರ್ವಹಣೆಯನ್ನು ಕಿ.ಮೀ. 89.30 ರಿಂದ 113.00 ವರೆಗೆ (ಜೇವರ್ಗಿ-ಚಾಮರಾಜನಗರ) (EPC Mode) | ಕಾಮಗಾರಿ ಪೂರ್ಣ ಗೊಂಡಿದ್ದು, ಪ್ರಸ್ತುತ ನಿರ್ವಹಣಾ ಅವಧಿ ಯಲ್ಲಿರುತ್ತದೆ. |
| 2 | 142.00 ರಿಂದ 171.60 | ರಾಷ್ಟ್ರೀಯ ಹೆದ್ದಾರಿ 150ಎ ರಲ್ಲಿ ನಿಯತಕಾಲಿಕ ನಿರ್ವಹಣೆಯನ್ನು ಕಿ.ಮೀ. 142.00 ರಿಂದ 171.60 ವರೆಗೆ (ಜೇವರ್ಗಿ-ಚಾಮರಾಜನಗರ) | ಕಾಮಗಾರಿ ಪೂರ್ಣಗೊಂಡಿದ್ದು, ಪ್ರಸ್ತುತ ನಿರ್ವಹಣಾ ಅವಧಿಯಲ್ಲಿರುತ್ತದೆ |
| 3 | 112.750 ರಿಂದ 142.00 ಮತ್ತು 147.07 ರಿಂದ 149.07 | ರಾಷ್ಟ್ರೀಯ ಹೆದ್ದಾರಿ-150ಎ ಕಿ.ಮೀ. 112.75 ರಿಂದ 142.00 (ಲಿಂಗಸುಗೂರು-ಮುದಬಾಳ ಕ್ರಾಸ್) ಮತ್ತು ಕಿ.ಮೀ.147.07 ರಿಂದ 149.07 (ಮಸ್ಕಿ ನಗರ ಲಿಮಿಟ್) (EPC Mode) | ಕಾಮಗಾರಿ 2021-2022ರ ಸಾಲಿಗೆ ವಾರ್ಷಿಕ ಯೋಜನೆ ಯಡಿಯಲ್ಲಿ ಕೇಂದ್ರ ಭೂಸಾರಿಗೆ ಮಂತ್ರಾಲಯದಿಂದ ಅನುಮೋದನೆ ದೊರೆತಿರುತ್ತದೆ. ಪ್ರಸ್ತುತ ತಾಂತ್ರಿಕ ಅನುಮೋದನೆ ಪಡೆಯುವ ಹಂತದಲ್ಲಿರುತ್ತದೆ. |

ರಾಷ್ಟ್ರೀಯ ಹೆದ್ದಾರಿ-150ಎ ಕಿ.ಮೀ.198.92 ರಿಂದ 254.80 ರಸ್ತೆಯು ಬಳ್ಳಾರಿ ಮತ್ತು ಕೊಪ್ಪಳ ಜಿಲ್ಲೆಗಳಲ್ಲಿ ಹಾದುಹೋಗುತ್ತಿದ್ದು, ಈ ಕೆಳಕಂಡಂತೆ ಕಾಮಗಾರಿಗಳನ್ನು ಕೈಗೊಳ್ಳಲಾಗಿದೆ.

| ಕ್ರ ಸಂ | ಚೈನೇಜ್ ಕಿ.ಮೀ | ಕಾಮಗಾರಿ ಹೆಸರು | ಷರಾ |
|---|---|---|---|
| 1 | 198.92 ರಿಂದ 214.88 | ರಾಷ್ಟ್ರೀಯ ಹೆದ್ದಾರಿ 150ಎ ರ ಕಿ.ಮೀ. 198.92 ರಿಂದ 214.880 ಪಟ್ಟಿ ಬಾಹುಗಳುಳ್ಳ ದ್ವಿಪಥ ರಸ್ತೆ ಅಭಿವೃದ್ಧಿ ಕಾಮಗಾರಿ (EPC Mode) | 15.68 ಕಿ.ಮೀ ಕಾಮಗಾರಿ ಪ್ರಗತಿಯಲ್ಲಿರುತ್ತದೆ. |
| 2 | 214.88 ರಿಂದ 235.10 | ರಾಷ್ಟ್ರೀಯ ಹೆದ್ದಾರಿ 150ಎ ರ ಕಿ.ಮೀ. 214.88 ರಿಂದ 235.100 ಪಟ್ಟಿ ಬಾಹುಗಳುಳ್ಳ ದ್ವಿಪಥ ರಸ್ತೆ ಅಭಿವೃದ್ಧಿ ಕಾಮಗಾರಿ | 20.22 ಕಿ.ಮೀ ರಸ್ತೆ ಕಾಮಗಾರಿ ಪೂರ್ಣಗೊಂಡಿರುತ್ತದೆ. |
| 3 | 235.10 ರಿಂದ 254.80 | ರಾಷ್ಟ್ರೀಯ ಹೆದ್ದಾರಿ 150ಎ ರ ಕಿ.ಮೀ. 235.10 ರಿಂದ 254.80 ಪಟ್ಟಿ ಬಾಹುಗಳುಳ್ಳ ದ್ವಿಪಥ ರಸ್ತೆ ಅಭಿವೃದ್ಧಿ ಕಾಮಗಾರಿ (EPC Mode) | 19.8 ಕಿ.ಮೀ ಕಾಮಗಾರಿ 2021-22 ರ ವಾರ್ಷಿಕ ಯೋಜನೆಯಲ್ಲಿ ಅಳವಡಿಸಲಾಗಿರುತ್ತದೆ. |

| | | |
|---|---|---|
| ಉ) | ಸದರಿ ಹೆದ್ದಾರಿಯನ್ನು ಆರು ಪಥದ ರಸ್ತೆಯನ್ನಾಗಿ ವಿಸ್ತರಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; ಇದ್ದಲ್ಲಿ, ಯಾವ ಕಾಲ ಮಿತಿಯಲ್ಲಿ ಈ ಯೋಜನೆಯನ್ನು ಕೈಗೆತ್ತಿಕೊಳ್ಳಲಾಗುವುದು? (ವಿವರ ನೀಡುವುದು) | ಸದರಿ ಹೆದ್ದಾರಿಯನ್ನು ಆರು ಪಥದ ರಸ್ತೆಯನ್ನಾಗಿ ವಿಸ್ತರಿಸುವ ಪ್ರಸ್ತಾವನೆ ಇರುವುದಿಲ್ಲ. |

ಕಡತ ಸಂಖ್ಯೆ: ಲೋಇ 61 ಸಿಐಎಸ್ 2022 (ಇ)

(ಸಿ.ಸಿ. ಪಾಟೀಲ)
ಲೋಕೋಪಯೋಗಿ ಸಚಿವರು

LCQ No. 2515

# ಅನುಬಂಧ-1

| ಕ್ರ.ಸಂ. | ವಿಭಾಗದ ಹೆಸರು | ರಾಜ್ಯ ಹೆದ್ದಾರಿಗಳು ಒಟ್ಟು | | ಒಟ್ಟು ರಸ್ತೆ ಉದ್ದ ಓವರ್‌ಲ್ಯಾಪ್ ಹೊರತುಪಡಿಸಿ (ಕಿ.ಮೀ.ಗಳಲ್ಲಿ) |
|---|---|---|---|---|
| | | ರಸ್ತೆಗಳ ಸಂಖ್ಯೆ | ಉದ್ದ (ಕಿ.ಮೀ.ಗಳಲ್ಲಿ) | |
| 1 | 2 | 3 | 4 | 5 |
| 1 | ಕಲಬುರಗಿ | 51 | 1291.79 | 1291.79 |
| 2 | ಸೇಡಂ | 27 | 551.40 | 551.40 |
| 3 | ಬೀದರ | 45 | 826.74 | 826.74 |
| 4 | ಯಾದಗಿರಿ | 28 | 758.04 | 758.04 |
| | ಒಟ್ಟು | **151** | **3427.97** | **3427.97** |
| 1 | ಬಳ್ಳಾರಿ | 25 | 633.54 | 613.32 |
| 2 | ಹಡಗಲಿ | 41 | 1107.38 | 1065.56 |
| 3 | ಕೊಪ್ಪಳ | 30 | 754.85 | 735.95 |
| 4 | ರಾಯಚೂರು | 47 | 1149.66 | 1125.25 |
| | ಒಟ್ಟು | **143** | **3645.43** | **3540.08** |
| **ಈಶಾನ್ಯ ವಲಯದ ಒಟ್ಟು** | | **294** | **7073.4** | **6968.05** |

ಮುಖ್ಯ ಇಂಜಿನಿಯರರು
ಸಂಪರ್ಕ ಮತ್ತು ಕಟ್ಟಡಗಳು (ಈಶಾನ್ಯ) ಕಲಬುರಗಿ

LCQ ಸಂ-25 1538

ಅನುಬಂಧ-2

ಮಾನ್ಯ ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ ಸುನೀಲ್ ವಲ್ಯಾಪೂರ (ವಿಧಾನಸಭೆಯಿಂದ ಚುನಾಯಿತರಾದವರು) ಇವರು ಮಂಡಿಸಿರುವ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ 2140 (2515)ಕ್ಕೆ ಉತ್ತರಗಳು

ಕಳೆದ ಮೂರು ವರ್ಷಗಳಲ್ಲಿ ಬಿಡುಗಡೆಯಾದ ಅನುದಾನದ ವಿವರಗಳು

(ರೂ. ಲಕ್ಷಗಳಲ್ಲಿ)

| ಕ್ರಸಂ | ಲೆಕ್ಕ ಶೀರ್ಷಿಕೆ | ಯೋಜನೆ ಹೆಸರು | 2018-19 | 2019-20 | 2020-21 | 2021-22 | | ಒಟ್ಟು |
|---|---|---|---|---|---|---|---|---|
| | | | ಬಿಡುಗಡೆಯಾದ ಅನುದಾನ | ಬಿಡುಗಡೆಯಾದ ಅನುದಾನ | ಬಿಡುಗಡೆಯಾದ ಅನುದಾನ | ಬಿಡುಗಡೆಯಾದ ಅನುದಾನ | ಬಿಡುಗಡೆಯಾದ ಅನುದಾನ | ಬಿಡುಗಡೆಯಾದ ಅನುದಾನ |
| 1 | 2 | 3 | 4 | 5 | 6 | 10 | 11 | 7 |
| 1 | 3054-03-337-0-05-200 | ರಾಜ್ಯ ಹೆದ್ದಾರಿಗಳ ನಿರ್ವಹಣೆ-ನಿರ್ವಹಣಾ ವೆಚ್ಚ | 7339.00 | 6781.00 | 0.00 | | | 14120.00 |
| 2 | 3054-04-337-1-10-200 | ಜಿಲ್ಲಾ ಮತ್ತು ಇತರೆ ರಸ್ತೆಗಳ ನಿರ್ವಹಣೆ-ನಿರ್ವಹಣಾ ವೆಚ್ಚ | 7308.00 | 6547.00 | 0.00 | | | 13855.00 |
| | | ವಲಯದ ಒಟ್ಟು | **14647.00** | **13328.00** | **0.00** | **0.00** | **0.00** | **27975.00** |

ಮುಖ್ಯ ಇಂಜಿನಿಯರರು
ಸಂಪರ್ಕ ಮತ್ತು ಕಟ್ಟಡಗಳು (ಈಶಾನ್ಯ) ಕಲಬುರಗಿ